# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

...ವರ್ಷ ೮ನೇ ಸಂಚಿಕೆ ಕೊಪ್ಪ ೧೪-೧೦-೧೯೮೪ ಭಾನುವಾರ ಬೆಲೆ ೨೦ ಪೈಸೆ


## ಮಿಶ್ರತಳಿ ಹೆಣ್ಣು ಕರುಗಳ ಪೋಷಣೆಗೆ ೧೩೦೦ ರೂ. ಪ್ರೋತ್ಸಾಹ ಧನ: ನಾರಾಯಣಗೌಡ

ಚಿಕ್ಕಮಗಳೂರು: ರಾಜ್ಯದಲ್ಲಿ ಮಿಶ್ರತಳಿ ಹೆಣ್ಣು ಕರುಗಳ ಆರೈಕೆಗಾಗಿ ೧೩೦೦ ರೂ.ಗಳ ಪ್ರೋತ್ಸಾಹಧನ ನೀಡುವ ಯೋಜನೆಯೊಂದನ್ನು ಸರ್ಕಾರ ೧೯೮೫ ರ ಏಪ್ರಿಲ್‌ನಿಂದ ಜಾರಿಗೆ ತರಲಿದೆಯೆಂದು ಪಶುಸಂಗೋಪನಾ ಮಂತ್ರಿ ಹೆಚ್. ಎ. ನಾರಾಯಣ ಗೌಡ ಈಚೆಗೆ ಸಮಾರಂಭವೊಂದರಲ್ಲಿ ತಿಳಿಸಿದರು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ವಯ ನೀಡುವ ಸಾಲದಿಂದ ಹೆಚ್ಚು ಗ್ರಾಮೀಣ ಪ್ರದೇಶದಲ್ಲಿ ಬರೀ ಎಮ್ಮೆಗಳನ್ನು ಕೊಳ್ಳುವ ಪರಿಪಾಠ ಬೆಳೆದಿದೆ. ಆದರೆ ಎಮ್ಮೆಗಳಿಗಿಂತ ಮಿಶ್ರತಳಿ ಹಸುಗಳು ಹೆಚ್ಚು ಲಾಭದಾಯಕ ಎಂದ ಅವರು, ಪ್ರತಿ ಗ್ರಾಮದಲ್ಲೂ ನಾಲ್ಕು ಜನ ವಿದ್ಯಾವಂತ ಯುವಕರು ಮುಂದೆ ಬಂದು ಹೈನುಗಾರಿಕೆ ಕೈಗೊಂಡರೆ ಇತರ ರೈತರೂ ಅವರನ್ನು ಅನುಸರಿಸಿ, ತಮ್ಮ ಆರ್ಥಿಕ ಮಟ್ಟ ಉತ್ತಮಪಡಿಸಿಕೊಳ್ಳುತ್ತಾರೆ ಎಂದು ಅವರು ಯುವಜನರಿಗೆ ಕರೆ ನೀಡಿದರು.

## ಜಿಲ್ಲಾ ಅಡಿಕೆ ಬೆಳೆಗಾರರ ಸಂಘದ ಅಧ್ಯಕ್ಷರಾಗಿ ...ರ್ಜರ್ ಪುನರಾಯ್ಕೆ

ಕೊಪ್ಪ: ಇಲ್ಲಿನ 'ಚಿಕ್ಕಮಗಳೂರು ಜಿ... ಅಡಿಕೆ ಬೆಳೆಗಾರರ ಸಂಘ'ದ ಸರ್ವಸದ... ಸಭೆ ಅ. ೭ರಂದು ನಡೆದು, ಅಧ್ಯಕ್ಷ... ಪಿ.ಜಿ.ಗುರ್ಜರ್ ಪುನಃ ಆಯ್ಕೆಯಾಗಿ... ರೆ. ಜೆ.ಎಸ್.ಶ್ರೀಕಂಠ ಮತ್ತು ಹೆಚ್. ಸುಬ್ಬರಾವ್ ಅವರುಗಳೂ ಪುನಃ ಕಾರ್ಯ...ಗಳಾಗಿದ್ದಾರೆ.

...ಘದ ನಿರ್ದೇಶಕರಲ್ಲೊಬ್ಬರಾದ ಶಾಸಕ ...ವಿಂದ ಗೌಡರು ಸಭೆಯಲ್ಲಿ ಭಾಗವಹಿಸಿ ...ಗಾರರನ್ನುದ್ದೇಶಿಸಿ ಭಾಷಣ ಮಾಡಿದರು.

...ಸಭೆಯ ನಿರ್ಣಯಗಳು: ೧) ೧೯೮೨–...ರ ಬೇಸಿಗೆಯಲ್ಲಿ ನಷ್ಟಕ್ಕೀಡಾದ ಅಡಿಕೆ ...ಟಗಳಿಗೆ ಪರಿಹಾರ ಕೊಡುವ ಬಗ್ಗೆ ...ಡಲೇ ಸರಿಯಾದ ಕ್ರಮ ತೆಗೆದುಕೊಳ್ಳ...ಕು. ೨) ಶಿವಮೊಗ್ಗ ನಗರನಿಂದ ವ್ಯ. ...ಸ. ಮಾರುಕಟ್ಟೆಗೆ ಕ್ರಮಬದ್ಧವಾಗಿ ... ಓಡಿಸಬೇಕು. ೩) ಅಡಿಕೆ ತೋಟ...ಗೆ ಹಂದಿ ಹಾವಳಿ ಬಗ್ಗೆ ತೀವ್ರ ಕ್ರಮ ...ದುಕೊಳ್ಳಬೇಕು.

---

**ರಕ್ತದಾನ ಎಲ್ಲಕ್ಕಿಂತ ಶ್ರೇಷ್ಠ ದಾನ**

**ರಕ್ತ ದಾನ ಮಾಡಿ,**

**ಮಹಾದಾನಿಗಳೆನಿಸಿಕೊಳ್ಳಿ**

**—ಲಯನ್ಸ್ ಕ್ಲಬ್, ಕೊಪ್ಪ.**

---

## ಶೃಂಗೇರಿಯಲ್ಲಿ ಅಡಿಕೆ ಬೆಳೆ ಕುರಿತು ಉಪಯುಕ್ತ ವಿಚಾರ ಸಂಕಿರಣ

**(ವರದಿ: ಕಲ್ಕುಳಿ ವಿಠಲ ಹೆಗ್ಡೆ)**

**ಶೃಂಗೇರಿ: ಅಡಿಕೆ ಬೆಳೆಗಾರರಿಗೆ ಅತ್ಯಂತ ಉಪಯುಕ್ತವಾದ ವಿಚಾರ ಸಂಕಿರಣವೊಂದು ಅ. ೮ ಮತ್ತು ೯ ರಂದು ಇಲ್ಲಿನ ಜೆ. ಸಿ. ಬಿ. ಎಂ. ಕಾಲೇಜು ಆವರಣದಲ್ಲಿ ನಡೆಯಿತು.**

ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯ ಮತ್ತು ತೋಟಗಾರಿಕೆ ಇಲಾಖೆಗಳು ಜಂಟಿಯಾಗಿ ಏರ್ಪಡಿಸಿದ್ದ ಇದರಲ್ಲಿ ಹಲವು ಕೃಷಿ ವಿಶ್ವವಿದ್ಯಾನಿಲಯಗಳ ಮತ್ತು ತೋಟಗಾರಿಕೆ ಸಂಶೋಧನಾ ಕೇಂದ್ರಗಳ ವಿಶ್ವವಿಖ್ಯಾತ ವಿಜ್ಞಾನಿಗಳಾದಿಯಾಗಿ ತಜ್ಞರು ಭಾಗವಹಿಸಿ ರೈತರಿಗೆ ಅಡಿಕೆ ಬೆಳೆಯ ಅಭಿವೃದ್ಧಿ ಮತ್ತು ಸಂರಕ್ಷಣೆಯ ಕುರಿತು ವ್ಯಾಪಕವಾದ ಮಾಹಿತಿಗಳನ್ನಿತ್ತರು. ವಿವರವಾದ ಚರ್ಚೆ, ವಿಚಾರ ವಿನಿಮಯ ನಡೆದವು

ದೇವಂಗಿಯ ಸಂಶೋಧನಾಶೀಲ ರೈತ ಪ್ರಫುಲ್ಲಚಂದ್ರ, ಚಿಕ್ಕಮಗಳೂರು ಜಿಲ್ಲಾ ಅಡಿಕೆ ಬೆಳೆಗಾರರ ಸಂಘದ ಅಧ್ಯಕ್ಷ ಪಿ. ಜಿ. ಗುರ್ಜರ್ ಮುಂತಾದ ಅನೇಕ ಜನ ಯಶಸ್ವಿ ಬೆಳೆಗಾರರು ಮತ್ತು ಬೆಳೆಗಾರರ ಮುಂದಾಳುಗಳು ತಮ್ಮ ಅನುಭವ, ಆಲೋಚನೆಗಳನ್ನು ರೈತರಿಗೆ ವಿವರಿಸಿದರು. ತೋಟಗಾರಿಕೆ ಇಲಾಖೆ ನಿರ್ದೇಶಕ ಅರವಿಂದ ಜಾಧವ್ ಅಧ್ಯಕ್ಷತೆ ವಹಿಸಿದ್ದು ಜಿಲ್ಲಾಧಿಕಾರಿ ಬಿ. ಪಾರ್ಥ ಸಾರಥಿ ಮುಖ್ಯ ಅತಿಥಿಯಾಗಿದ್ದರು.

**ಪ್ರಚಾರ ಕೊಡದ ಬೇಜವಾಬ್ದಾರಿ–**

**ಪ್ರಯೋಜನ ವಂಚಿತ ರೈತರು**

ಸರಿಯಾದ ರೀತಿಯಲ್ಲಿ ಪ್ರಚಾರ ಕೊಟ್ಟಿದ್ದರೆ ಈ ವಿಚಾರ ಸಂಕಿರಣದಲ್ಲಿ ಅಡಿಕೆ ಬೆಳೆಯುವ ಮಲೆನಾಡಿನ ಆರೆಂಟು ತಾ||ಗಳ ಸಾವಿರಗಟ್ಟಲೆ ಬೆಳೆಗಾರರು ಆಸಕ್ತಿಯಿಂದ ಭಾಗವಹಿಸುತ್ತಿದ್ದರು. ಆದರೆ ಆ ಜವಾಬ್ದಾರಿ ಹೊತ್ತಿದ್ದ ತೋಟಗಾರಿಕೆ ಇಲಾಖೆ ಅಧಿಕಾರಿಗಳು (ಬಂದಷ್ಟು ಜನರಿಗೆ ಉತ್ತಮ ಊಟ, ವಸತಿ ಏರ್ಪಡಿಸಿ 'ಸೈ' ಎನ್ನಿಸಿಕೊಂಡರೂ) ಆ ಕಡೆ ತಲೆಯನ್ನೇ ಕೊಟ್ಟಂತೆ ಕಾಣಲಿಲ್ಲ. ಸುಮಾರು ೫೦೦ರಷ್ಟಿದ್ದ ಬೆಳೆಗಾರರು ಅಧಿಕಾರಿಗಳ, ತಂತ್ರಜ್ಞರ, ವಿಜ್ಞಾನಿಗಳ ಎದುರು ಗೌಣವಾಗಿ ಕಂಡರು.

ಅಡಿಕೆಯ ಹಳದಿ ಎಲೆ ರೋಗ ಚರ್ಚೆಯ ಒಂದು ಪ್ರಮುಖ ವಿಷಯವಾಗಿದ್ದರೂ, ಕೃಷಿ ವಿ.ವಿ.ದೊಂದಿಗೆ ಸತತ ಸಂಪರ್ಕ ಇಟ್ಟುಕೊಂಡಿರುವ ಹಳದಿಎಲೆ ರೋಗಪೀಡಿತ ತೋಟಗಾರರ ಸಂಘಕ್ಕೇ ವಿಷಯ ತಿಳಿಸಿಲ್ಲ. ಪ್ರಾಂತ್ಯದ ತೀವ್ರ ಹಾನಿಗೊಳಪಟ್ಟ ತೋಟಗಳವರಿಗೂ ತಿಳಿಸಿಲ್ಲ. ಪೋಸ್ಟರುಗಳನ್ನು ಅಚ್ಚಿಸಿದ್ದರೂ ಹಳ್ಳಿಗಳ ಕಡೆ ಅವುಗಳ ಪ್ರಸಾರವಿಲ್ಲ.

ಈ ಬಗ್ಗೆಲ್ಲ ತೀವ್ರಟೀಕೆಗಳು ಸಭೆಯಲ್ಲೇ ಬಂದಾಗ ಅಧಿಕಾರಿಗಳು ಕ್ಷಮಾಪಣೆ ಕೋರಿದರಾದರೂ ಇಂಥ ಅಪೂರ್ವ ಸಂಕಿರಣದಿಂದ ವಂಚಿತರಾದ ರೈತ ಸಮೂಹಕ್ಕೆ ಅದರಿಂದಾದ ಪ್ರಯೋಜನವೇನು?

(ಈ ವಿಚಾರ ಸಂಕಿರಣದ ಬಗ್ಗೆ ಕಲ್ಕುಳಿ ವಿಠಲ ಹೆಗ್ಡೆ ಮತ್ತು ಹೆಗ್ಗಾಡು ಜಯಂತ್ ಅವರಿಂದ ವಿವರವಾದ ಸಮೀಕ್ಷೆಯನ್ನು ಅ. ೨೧ರ ಸಂಚಿಕೆಯಲ್ಲಿ ಕೊಡುತ್ತೇವೆ. –ಸಂ.)

## ಜಿಲ್ಲೆಯಲ್ಲಿ ೧೫,೧೮೮ ಜನತಾ ಮನೆಗಳ ನಿರ್ಮಾಣ

ಚಿಕ್ಕಮಗಳೂರು: ಜಿಲ್ಲೆಯಲ್ಲಿ ಈವರೆಗೆ ೫ ಕೋಟಿ ರೂ. ವೆಚ್ಚದಲ್ಲಿ ೧೫,೧೮೮ ಜನತಾ ಮನೆಗಳನ್ನು ನಿರ್ಮಿಸಲಾಗಿದೆ. ಜಿಲ್ಲೆಗೆ ೧ ಕೋಟಿ ೨೫ ಲಕ್ಷ ರೂ. ವೆಚ್ಚದಲ್ಲಿ ಇನ್ನೂ ೪೬೮೫ ಮನೆಗಳು ಮಂಜೂರಾಗಿವೆ. 'ಭಾಗ್ಯಮಂದಿರ'ದಲ್ಲಿ ೮೯೫ ಮನೆಗಳನ್ನು ನಿರ್ಮಿಸಿ ೫೯೯ ಮನೆಗಳನ್ನು ದುರಸ್ತಿ ಮಾಡಲಾಗಿವೆ.

**ಶೃಂಗೇರಿ ತಾಲ್ಲೂಕಿನಲ್ಲಿ ೧೧೧೦ ಮನೆ**

ಶೃಂಗೇರಿ: ಈ ತಾಲ್ಲೂಕಿನಲ್ಲಿ ಈ ವರೆಗೆ ಮನೆ ಇಲ್ಲದವರಿಗೆ ೧೧೧೦ ಮನೆಗಳನ್ನು ನಿರ್ಮಿಸಿ ಕೊಡಲಾಗಿದೆ. ಮಂಜೂರಾಗಿರುವ ಇನ್ನುಳಿದ ೩೨೦ ಮನೆಗಳ ಕಾರ್ಯ ವಿವಿಧ ಹಂತದಲ್ಲಿದೆ. ಈ ವರ್ಷ ಮಂಜೂರಾದ ೧೦೦ ಮನೆಗಳನ್ನು ಮಳೆಯ ಕಾರಣ ನಿರ್ಮಿಸಿ ಕೊಡಲಾಗಿಲ್ಲ. 'ಭಾಗ್ಯ ಮಂದಿರ'ದಲ್ಲಿ ಮಂಜೂರಾದ ೧೦ ಮನೆಗಳಲ್ಲಿ ೫ ನಿರ್ಮಿಸಿ ಕೊಡಲಾಗಿದೆ.

## ...ಅಂಗನವಾಡಿ ಕಾರ್ಯಕರ್ತೆಯರ ಧರಣಿ ನಿರ್ಧಾರ

ಚಿಕ್ಕಮಗಳೂರು: ಅಂಗನವಾಡಿ ಯೋ...ಜಾರಿಯಲ್ಲಿರುವ ಕೊಪ್ಪ, ಕಡೂರು, ...ಡಿಗೆರೆ ತಾ||ಗಳ ಕಾರ್ಯಕರ್ತೆಯರು ಅ. ...ರಂದು ಮೆರವಣಿಗೆ, ಧರಣಿ ನಡೆಸಬೇ...ದು ಅವರ ಜಿಲ್ಲಾ ಸಂಘ (ಎ.ಐ.ಟಿ.ಯು...ಗೆ ಸೇರ್ಪಡೆ) ತೀರ್ಮಾನಿಸಿದೆ. ಸರ್ಕಾರ...ಗೆ ಹೆಚ್ಚಿಸಿರುವ ಅವರ ಗೌರವಧನದ ...ತ್ತ ಜೀವನಾವಶ್ಯಕತೆಗಿಂತ ಬಹಳ ಕಡಿ...ಮೆಂದು ಸಂಘ ಟೀಕಿಸಿ, ಕಾರ್ಯಕರ್ತೆ...ಲ್ಲಿ ಎರಡು ದರ್ಜೆಯ ಸಂಬಳದ ನೀತಿ...ನ್ನು ವಿರೋಧಿಸಿದೆ.

ಅಂಗನವಾಡಿ ಕಾರ್ಯಕರ್ತೆಯರನ್ನು ಖಾ...ಗೊಳಿಸಬೇಕು, ಗೌರವಧನದ ಬದಲು ...ಕರ್ತೆಯರಿಗೆ ಕನಿಷ್ಠ ೫೦೦ ರೂ. ಮ...ಸಹಾಯಕಿಯರಿಗೆ ಕನಿಷ್ಠ ೩೦೦ ರೂ. ...ನ್ನು ಸಂಬಳವೆಂದು ನೀಡಬೇಕು, ಸರ...ನೌಕರರೆಂದು ಪರಿಗಣಿಸಬೇಕು, ಸೌದೆ ...ಯೆಣ್ಣೆಗೆ ಕಾರ್ಡು ಕೊಡಬೇಕು, ...ರ ಸಾಮಗ್ರಿಗಳನ್ನು ಅಂಗನವಾಡಿ ...ಗಳಿಗೆ ತಂದು ಕೊಡಬೇಕು, ಸಾಮಾಜಿಕ ಭದ್ರತೆ ನೀಡಬೇಕು–ಮುಂತಾದುವು ಅವರ ಪ್ರಮುಖ ಬೇಡಿಕೆಗಳು.

## ಅಡಿಕೆ ಬೆಳೆ ನಷ್ಟಕ್ಕೆ ಪರಿಹಾರ: ಅಲ್ಲಿ — ಇಲ್ಲಿ

೧೯೮೩ರ ಬೇಸಿಗೆಯಲ್ಲಿ ಅನಾವೃಷ್ಟಿಗೆ ತುತ್ತಾದ ಕೇರಳದ ಕಾಸರಗೋಡು-ಹೊಸದುರ್ಗ ಪ್ರದೇಶದ ಅಡಿಕೆ ತೋಟಗಳ ಕೃಷಿಕರಿಗೆ ಉಂಟಾದ ನಷ್ಟವನ್ನು ಅಂದಾಜು ಮಾಡಿ ಪರಿಹಾರ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಶಿಫಾರ್ಸು ಮಾಡಲು ಆ ರಾಜ್ಯದ ಕೃಷಿ ಅಡಿಷನಲ್ ಡೈರೆಕ್ಟರರ ನೇತೃತ್ವದಲ್ಲಿ ನೇಮಕವಾಗಿದ್ದ ಸಮಿತಿ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿದೆಯಂತೆ.

ವರದಿಯ ಮುಖ್ಯ ಶಿಫಾರ್ಸುಗಳು:— ನಾಶವಾದ ಪ್ರತಿ ಅಡಿಕೆ ಮರಕ್ಕೆ ೫೦ ರೂ. ಪರಿಹಾರ, ಅಡಿಕೆ ಕೃಷಿ ಅಭಿವೃದ್ಧಿಗೆ ಸಾಲ ಸೌಲಭ್ಯ, ಕೊಳವೆ ಬಾವಿಗಳನ್ನು ತೋಡಿಕೊಳ್ಳಲು ಆರ್ಥಿಕ ಸಹಾಯ, ನೀರಾವರಿಗೆ ವಿದ್ಯುತ್ ಪೂರೈಕೆ, ಬೆಳೆ ವಿಮಾ ಪದ್ಧತಿಯ ಅನುಷ್ಠಾನ, ಇತ್ಯಾದಿ.

ನಮ್ಮ ಮಲೆನಾಡಲ್ಲೂ ೧೯೮೨–೮೩ರ ಬೇಸಿಗೆಯಲ್ಲಿ ಒಂದು ಮಳೆಯೂ ಬಾರದೆ ಅಡಿಕೆ ತೋಟಗಳೆಲ್ಲ ಬಹಳ ಹಾನಿಗೀಡಾದವು. ಚಿಕ್ಕಮಗಳೂರು ಜಿಲ್ಲಾ ಅಡಿಕೆ ಬೆಳೆಗಾರರ ಸಂಘದ ಒಂದು ನಿಯೋಗ ಬೆಂಗಳೂರವರೆಗೂ ಹೋಗಿ, 'ಸ್ವತಃ ಅಡಿಕೆ ಕೃಷಿಯ ಕಷ್ಟ-ಸುಖ ಬಲ್ಲ' ಮುಖ್ಯ ಮಂತ್ರಿ (ಆಗ ತಾನೇ ಅಧಿಕಾರಕ್ಕೆ ಬಂದಿದ್ದ) ರಾಮಕೃಷ್ಣ ಹೆಗ್ಗಡೆಯನ್ನು ಆಸೆಗಣ್ಣಿನಿಂದ 'ಕಂಡಿತು.' ಸಹಾನುಭೂತಿಯಿಂದ ಪರಿಶೀಲನೆ ನಡೆಸಿ ಸಂತ್ರಸ್ತರಿಗೆ ನೆರವಾಗುವ ಭರವಸೆ ಪಡೆದು ಬಂತು.

ಕೊಪ್ಪದ ತೋಟಗಾರಿಕೆ ಅಧಿಕಾರಿಗಳಿಗೆ ಅಡಿಕೆ ಬೆಳೆಯ ನಷ್ಟವನ್ನು ಸಮಗ್ರವಾಗಿ ಪರಿಶೀಲಿಸಿ ವರದಿ ಕಳಿಸುವಂತೆ ಆದೇಶ ಬಂತು. ಬೆಳೆಗಾರರ ಸಂಘ ಸಂತ್ರಸ್ತ ಬೆಳೆಗಾರರಿಂದ ೧೬೭೧ ಅರ್ಜಿಗಳನ್ನು ಸಲ್ಲಿಸಿತು. ಬೇರೆಯೂ ಇನ್ನಷ್ಟು ಅರ್ಜಿಗಳು ಸಲ್ಲಿಸಲ್ಪಟ್ಟವು. ಸಂತ್ರಸ್ತರು ಪರಿಹಾರಕ್ಕಾಗಿ ಕಾದರು. ಅದು ಮಾತ್ರ ಬರಲಿಲ್ಲ.

ನಂತರ ಸಂಘದವರಿಗೆ ತಿಳಿದುಬಂದಂತೆ, ಅಧಿಕಾರಿಗಳು ಕೇವಲ ಶೇ. ೮ ರಿಂದ ೧೫ ರಷ್ಟು ಮಾತ್ರ ನಷ್ಟವಾಗಿದೆಯೆಂದು ವರದಿ ಸಲ್ಲಿಸಿದ್ದಾರಂತೆ. ಕೇಳಿದರೆ, 'ನಾವು ಗ್ರಾಮವಾರು ಪರಿಶೀಲನೆ ಮಾಡಿದ್ದೇವೆ. ಸ...ಪರಿಶೀಲನೆ ಮಾಡಿಯೇ ವರದಿ ಸ...' ಎನ್ನುತ್ತಾರಂತೆ. ಆದರೆ ಪರಿಹಾರ ... ಬೇಕಾಗಿರುವುದು ಯಾವ್ಯಾರಿಗೆ ತಿ...

(ಮುಂದೆ ...)

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ — ೧೯

ವರ್ಷ ೮ನೇ ಸಂಚಿಕೆ ಕೊಪ್ಪ ೧೪-೧೨-೧೯೮೪ ಭಾನುವಾರ ಬೆಲೆ ೨೦ ಪೈಸೆ

## ಮಿಶ್ರತಳಿ ಹೆಣ್ಣು ಕರುಗಳ ಪೋಷಣೆಗೆ ೧೩೦೦ ರೂ. ಪ್ರೋತ್ಸಾಹ ಧನ: ನಾರಾಯಣಗೌಡ

ಚಿಕ್ಕಮಗಳೂರು: ರಾಜ್ಯದಲ್ಲಿ ಮಿಶ್ರತಳಿ ಹೆಣ್ಣು ಕರುಗಳ ಆರೈಕೆಗಾಗಿ ೧೩೦೦ ರೂ.ಗಳ ಪ್ರೋತ್ಸಾಹಧನ ನೀಡುವ ಯೋಜನೆಯೊಂದನ್ನು ಸರ್ಕಾರ ೧೯೮೫ ರ ಏಪ್ರಿಲ್‌ನಿಂದ ಜಾರಿಗೆ ತರಲಿದೆಯೆಂದು ಪಶುಸಂಗೋಪನಾ ಮಂತ್ರಿ ಹೆಚ್. ಎ. ನಾರಾಯಣ ಗೌಡ ಈಚೆಗೆ ಸಮಾರಂಭವೊಂದರಲ್ಲಿ ತಿಳಿಸಿದರು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ವಯ ನೀಡುವ ಸಾಲದಿಂದ ನಮ್ಮ ಗ್ರಾಮೀಣ ಪ್ರದೇಶದಲ್ಲಿ ಬರೀ ಎಮ್ಮೆಗಳನ್ನು ಕೊಳ್ಳುವ ಪರಿಪಾಠ ಬೆಳೆದಿದೆ. ಆದರೆ ಎಮ್ಮೆಗಳಿಗಿಂತ ಮಿಶ್ರತಳಿ ಹಸುಗಳು ಹೆಚ್ಚು ಲಾಭದಾಯಕ ಎಂದ ಅವರು, ಪ್ರತಿ ಗ್ರಾಮದಲ್ಲೂ ನಾಲ್ಕು ಜನ ವಿದ್ಯಾವಂತ ಯುವಕರು ಮುಂದೆ ಬಂದು ಹೈನುಗಾರಿಕೆ ಕೈಗೊಂಡರೆ ಇತರ ರೈತರೂ ಅವರನ್ನು ಅನುಸರಿಸಿ, ತಮ್ಮ ಆರ್ಥಿಕ ಮಟ್ಟ ಉತ್ತಮಪಡಿಸಿಕೊಳ್ಳುತ್ತಾರೆ ಎಂದು ಅವರು ಯುವಜನರಿಗೆ ಕರೆ ನೀಡಿದರು.

## ಜಿಲ್ಲಾ ಅಡಿಕೆ ಬೆಳೆಗಾರರ ಸಂಘದ ಅಧ್ಯಕ್ಷರಾಗಿ ಗುರ್ಜರ್ ಪುನರಾಯ್ಕೆ

ಕೊಪ್ಪ: ಇಲ್ಲಿನ 'ಚಿಕ್ಕಮಗಳೂರು ಜಿಲ್ಲಾ ಅಡಿಕೆ ಬೆಳೆಗಾರರ ಸಂಘ'ದ ಸರ್ವಸದಸ್ಯರ ಸಭೆ ಅ. ೭ರಂದು ನಡೆದು, ಅಧ್ಯಕ್ಷರಾಗಿ ಪಿ.ಜಿ.ಗುರ್ಜರ್ ಪುನಃ ಆಯ್ಕೆಯಾಗಿದ್ದಾರೆ. ಜೆ.ಎಸ್.ಶ್ರೀಕಂಠ ಮತ್ತು ಹೆಚ್. ಸುಬ್ಬರಾವ್ ಅವರುಗಳೂ ಪುನಃ ಕಾರ್ಯದರ್ಶಿಗಳಾಗಿದ್ದಾರೆ.

ಸಂಘದ ನಿರ್ದೇಶಕರಲ್ಲೊಬ್ಬರಾದ ಶಾಸಕ ...ನಿಂದ ಗೌಡರು ಸಭೆಯಲ್ಲಿ ಭಾಗವಹಿಸಿ ...ಗಾರರನ್ನುದ್ದೇಶಿಸಿ ಭಾಷಣ ಮಾಡಿದರು.

ಸಭೆಯ ನಿರ್ಣಯಗಳು: ೧) ೧೯೮೨–...ರ ಬೇಸಿಗೆಯಲ್ಲಿ ನಷ್ಟಕ್ಕೀಡಾದ ಅಡಿಕೆ ತೋಟಗಳಿಗೆ ಪರಿಹಾರ ಕೊಡುವ ಬಗ್ಗೆ ...ಡಲೇ ಸರಿಯಾದ ಕ್ರಮ ತೆಗೆದುಕೊಳ್ಳಬೇಕು. ೨) ಶಿವಮೊಗ್ಗ ನಗರನಿಂದ ವ್ಯ. ...ಸ. ಮಾರುಕಟ್ಟೆಗೆ ಕ್ರಮಬದ್ಧವಾಗಿ ...ಓಡಿಸಬೇಕು. ೩) ಅಡಿಕೆ ತೋಟ...ಗೆ ಹಂದಿ ಹಾವಳಿ ಬಗ್ಗೆ ತೀವ್ರ ಕ್ರಮ ...ದುಕೊಳ್ಳಬೇಕು.

---

**ರಕ್ತದಾನ ಎಲ್ಲಕ್ಕಿಂತ ಶ್ರೇಷ್ಠ ದಾನ**
**ರಕ್ತ ದಾನ ಮಾಡಿ,**
**ಮಹಾದಾನಿಗಳೆನಿಸಿಕೊಳ್ಳಿ**
**—ಲಯನ್ಸ್ ಕ್ಲಬ್, ಕೊಪ್ಪ.**

---

## ಶೃಂಗೇರಿಯಲ್ಲಿ ಅಡಿಕೆ ಬೆಳೆ ಕುರಿತು ಉಪಯುಕ್ತ ವಿಚಾರ ಸಂಕಿರಣ

**(ವರದಿ: ಕಲ್ಕುಳಿ ವಿಠಲ ಹೆಗ್ಡೆ)**

**ಶೃಂಗೇರಿ: ಅಡಿಕೆ ಬೆಳೆಗಾರರಿಗೆ ಅತ್ಯಂತ ಉಪಯುಕ್ತವಾದ ವಿಚಾರ ಸಂಕಿರಣವೊಂದು ಅ. ೮ ಮತ್ತು ೯ ರಂದು ಇಲ್ಲಿನ ಜೆ. ಸಿ. ಬಿ. ಎಂ. ಕಾಲೇಜು ಆವರಣದಲ್ಲಿ ನಡೆಯಿತು.**

ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯ ಮತ್ತು ತೋಟಗಾರಿಕೆ ಇಲಾಖೆಗಳು ಜಂಟಿಯಾಗಿ ಏರ್ಪಡಿಸಿದ್ದ ಇದರಲ್ಲಿ ಹಲವು ಕೃಷಿ ವಿಶ್ವವಿದ್ಯಾನಿಲಯಗಳ ಮತ್ತು ತೋಟಗಾರಿಕೆ ಸಂಶೋಧನಾ ಕೇಂದ್ರಗಳ ವಿಶ್ವವಿಖ್ಯಾತ ವಿಜ್ಞಾನಿಗಳಾದಿಯಾಗಿ ತಜ್ಞರು ಭಾಗವಹಿಸಿ ರೈತರಿಗೆ ಅಡಿಕೆ ಬೆಳೆಯ ಅಭಿವೃದ್ಧಿ ಮತ್ತು ಸಂರಕ್ಷಣೆಯ ಕುರಿತು ವ್ಯಾಪಕವಾದ ಮಾಹಿತಿಗಳನ್ನಿತ್ತರು. ವಿವರವಾದ ಚರ್ಚೆ, ವಿಚಾರ ವಿನಿಮಯ ನಡೆದವು

ದೇವಂಗಿಯ ಸಂಶೋಧನಾಶೀಲ ರೈತ ಪ್ರಫುಲ್ಲಚಂದ್ರ, ಚಿಕ್ಕಮಗಳೂರು ಜಿಲ್ಲಾ ಅಡಿಕೆ ಬೆಳೆಗಾರರ ಸಂಘದ ಅಧ್ಯಕ್ಷ ಪಿ. ಜಿ. ಗುರ್ಜರ್ ಮುಂತಾದ ಅನೇಕ ಜನ ಯಶಸ್ವಿ ಬೆಳೆಗಾರರು ಮತ್ತು ಬೆಳೆಗಾರರ ಮುಂದಾಳುಗಳು ತಮ್ಮ ಅನುಭವ, ಆಲೋಚನೆಗಳನ್ನು ರೈತರಿಗೆ ವಿವರಿಸಿದರು. ತೋಟಗಾರಿಕೆ ಇಲಾಖೆ ನಿರ್ದೇಶಕ ಅರವಿಂದ ಜಾಧವ್ ಅಧ್ಯಕ್ಷತೆ ವಹಿಸಿದ್ದು ಜಿಲ್ಲಾಧಿಕಾರಿ ಬಿ. ಪಾರ್ಥ ಸಾರಥಿ ಮುಖ್ಯ ಅತಿಥಿಯಾಗಿದ್ದರು.

**ಪ್ರಚಾರ ಕೊಡದ ಬೇಜವಾಬ್ದಾರಿ–ಪ್ರಯೋಜನ ವಂಚಿತ ರೈತರು**

ಸರಿಯಾದ ರೀತಿಯಲ್ಲಿ ಪ್ರಚಾರ ಕೊಟ್ಟಿದ್ದರೆ ಈ ವಿಚಾರ ಸಂಕಿರಣದಲ್ಲಿ ಅಡಿಕೆ ಬೆಳೆಯುವ ಮಲೆನಾಡಿನ ಆರೆಂಟು ತಾ||ಗಳ ಸಾವಿರಗಟ್ಟಲೆ ಬೆಳೆಗಾರರು ಆಸಕ್ತಿಯಿಂದ ಭಾಗವಹಿಸುತ್ತಿದ್ದರು. ಆದರೆ ಆ ಜವಾಬ್ದಾರಿ ಹೊತ್ತಿದ್ದ ತೋಟಗಾರಿಕೆ ಇಲಾಖೆ ಅಧಿಕಾರಿಗಳು (ಬಂದಷ್ಟು ಜನರಿಗೆ ಉತ್ತಮ ಊಟ, ವಸತಿ ಏರ್ಪಡಿಸಿ 'ಸೈ' ಎನ್ನಿಸಿಕೊಂಡರೂ) ಆ ಕಡೆ ತಲೆಯನ್ನೇ ಕೊಟ್ಟಂತೆ ಕಾಣಲಿಲ್ಲ. ಸುಮಾರು ೫೦೦ರಷ್ಟಿದ್ದ ಬೆಳೆಗಾರರು ಅಧಿಕಾರಿಗಳ, ತಂತ್ರಜ್ಞರ, ವಿಜ್ಞಾನಿಗಳ ಎದುರು ಗೌಣವಾಗಿ ಕಂಡರು.

ಅಡಿಕೆಯ ಹಳದಿ ಎಲೆ ರೋಗ ಚರ್ಚೆಯ ಒಂದು ಪ್ರಮುಖ ವಿಷಯವಾಗಿದ್ದರೂ, ಕೃಷಿ ವಿ.ವಿ.ದೊಂದಿಗೆ ಸತತ ಸಂಪರ್ಕ ಇಟ್ಟುಕೊಂಡಿರುವ ಹಳದಿಎಲೆ ರೋಗಪೀಡಿತ ತೋಟಗಾರರ ಸಂಘಕ್ಕೇ ವಿಷಯ ತಿಳಿಸಿಲ್ಲ. ಪ್ರಾಂತ್ಯದ ತೀವ್ರ ಹಾನಿಗೊಳಪಟ್ಟ ತೋಟಗಳವರಿಗೂ ತಿಳಿಸಿಲ್ಲ. ಪೋಸ್ಟರುಗಳನ್ನು ಅಚ್ಚಿಸಿದ್ದರೂ ಹಳ್ಳಿಗಳ ಕಡೆ ಅವುಗಳ ಪ್ರಸಾರವಿಲ್ಲ.

ಈ ಬಗ್ಗೆಲ್ಲ ತೀವ್ರ ಟೀಕೆಗಳು ಸಭೆಯಲ್ಲೇ ಬಂದಾಗ ಅಧಿಕಾರಿಗಳು ಕ್ಷಮಾಪಣೆ ಕೋರಿದರಾದರೂ ಇಂಥ ಅಪೂರ್ವ ಸಂಕಿರಣದಿಂದ ವಂಚಿತರಾದ ರೈತ ಸಮೂಹಕ್ಕೆ ಅದರಿಂದಾದ ಪ್ರಯೋಜನವೇನು?

(ಈ ವಿಚಾರ ಸಂಕಿರಣದ ಬಗ್ಗೆ ಕಲ್ಕುಳಿ ವಿಠಲ ಹೆಗ್ಡೆ ಮತ್ತು ಹೆಗ್ಗಾರು ಜಯಂತ್ ಅವರಿಂದ ವಿವರವಾದ ಸಮೀಕ್ಷೆಯನ್ನು ಅ. ೨೮ರ ಸಂಚಿಕೆಯಲ್ಲಿ ಕೊಡುತ್ತೇವೆ. –ಸಂ.)

## ಜಿಲ್ಲೆಯಲ್ಲಿ ೧೫,೧೮೮ ಜನತಾ ಮನೆಗಳ ನಿರ್ಮಾಣ

ಚಿಕ್ಕಮಗಳೂರು: ಜಿಲ್ಲೆಯಲ್ಲಿ ಈವರೆಗೆ ೫ ಕೋಟಿ ರೂ. ವೆಚ್ಚದಲ್ಲಿ ೧೫,೧೮೮ ಜನತಾ ಮನೆಗಳನ್ನು ನಿರ್ಮಿಸಲಾಗಿದೆ. ಜಿಲ್ಲೆಗೆ ೧ ಕೋಟಿ ೨೫ ಲಕ್ಷ ರೂ. ವೆಚ್ಚದಲ್ಲಿ ಇನ್ನೂ ೪೬೮೫ ಮನೆಗಳು ಮಂಜೂರಾಗಿವೆ. 'ಭಾಗ್ಯಮಂದಿರ'ದಲ್ಲಿ ೮೯೫ ಮನೆಗಳನ್ನು ನಿರ್ಮಿಸಿ ೫೯೯ ಮನೆಗಳನ್ನು ದುರಸ್ತಿ ಮಾಡಲಾಗಿವೆ.

**ಶೃಂಗೇರಿ ತಾಲ್ಲೂಕಿನಲ್ಲಿ ೧೧೧೦ ಮನೆ**

ಶೃಂಗೇರಿ: ಈ ತಾಲ್ಲೂಕಿನಲ್ಲಿ ಈ ವರೆಗೆ ಮನೆ ಇಲ್ಲದವರಿಗೆ ೧೧೧೦ ಮನೆಗಳನ್ನು ನಿರ್ಮಿಸಿ ಕೊಡಲಾಗಿದೆ. ಮಂಜೂರಾಗಿರುವ ಇನ್ನುಳಿದ ೩೨೦ ಮನೆಗಳ ಕಾರ್ಯ ವಿವಿಧ ಹಂತದಲ್ಲಿದೆ. ಈ ವರ್ಷ ಮಂಜೂರಾದ ೧೦೦ ಮನೆಗಳನ್ನು ಮಳೆಯ ಕಾರಣ ನಿರ್ಮಿಸಿ ಕೊಡಲಾಗಿಲ್ಲ. 'ಭಾಗ್ಯ ಮಂದಿರ'ದಲ್ಲಿ ಮಂಜೂರಾದ ೧೦ ಮನೆಗಳಲ್ಲಿ ೫ ನಿರ್ಮಿಸಿ ಕೊಡಲಾಗಿದೆ.

## ಅಂಗನವಾಡಿ ಕಾರ್ಯಕರ್ತೆಯರ ಧರಣಿ ನಿರ್ಧಾರ

ಚಿಕ್ಕಮಗಳೂರು: ಅಂಗನವಾಡಿ ಯೋಜನೆ ಜಾರಿಯಲ್ಲಿರುವ ಕೊಪ್ಪ, ಕಡೂರು, ...ಡಿಗೆರೆ ತಾ||ಗಳ ಕಾರ್ಯಕರ್ತೆಯರು ಅ. ...ರಂದು ಮೆರವಣಿಗೆ, ಧರಣಿ ನಡೆಸಬೇಕೆಂದು ಅವರ ಜಿಲ್ಲಾ ಸಂಘ (ಎ.ಐ.ಟಿ.ಯು.ಸಿ. ಸೇರ್ಪಡೆ) ತೀರ್ಮಾನಿಸಿದೆ. ಸರ್ಕಾರ ...ಗೆ ಹೆಚ್ಚಿಸಿರುವ ಅವರ ಗೌರವಧನದ ಮೊತ್ತ ಜೀವನಾವಶ್ಯಕತೆಗಿಂತ ಬಹಳ ಕಡಿಮೆಯೆಂದು ಸಂಘ ಟೀಕಿಸಿ, ಕಾರ್ಯಕರ್ತೆಯರಲ್ಲಿ ಎರಡು ದರ್ಜೆಯ ಸಂಬಳದ ನೀತಿಯನ್ನು ವಿರೋಧಿಸಿದೆ.

ಅಂಗನವಾಡಿ ಕಾರ್ಯಕರ್ತೆಯರನ್ನು ಖಾಯಂಗೊಳಿಸಬೇಕು, ಗೌರವಧನದ ಬದಲು ಕಾರ್ಯಕರ್ತೆಯರಿಗೆ ಕನಿಷ್ಠ ೫೦೦ ರೂ. ಮತ್ತು ಸಹಾಯಕಿಯರಿಗೆ ಕನಿಷ್ಠ ೩೦೦ ರೂ.ಗಳನ್ನು ಸಂಬಳವೆಂದು ನೀಡಬೇಕು, ಸರಕಾರಿ ನೌಕರರೆಂದು ಪರಿಗಣಿಸಬೇಕು, ಸೌದೆ ಸೀಮೆಎಣ್ಣೆಗೆ ಕಾರ್ಡು ಕೊಡಬೇಕು, ಸರ ...ರ ಸಾಮಗ್ರಿಗಳನ್ನು ಅಂಗನವಾಡಿ ಕೇಂದ್ರಗಳಿಗೆ ತಂದು ಕೊಡಬೇಕು, ಸಾಮಾಜಿಕ ಭದ್ರತೆ ನೀಡಬೇಕು—ಮುಂತಾದುವು ಅವರ ಪ್ರಮುಖ ಬೇಡಿಕೆಗಳು.

## ಅಡಿಕೆ ಬೆಳೆ ನಷ್ಟಕ್ಕೆ ಪರಿಹಾರ: ಅಲ್ಲಿ — ಇಲ್ಲಿ

೧೯೮೩ರ ಬೇಸಿಗೆಯಲ್ಲಿ ಅನಾವೃಷ್ಟಿಗೆ ತುತ್ತಾದ ಕೇರಳದ ಕಾಸರಗೋಡು-ಹೊಸದುರ್ಗ ಪ್ರದೇಶದ ಅಡಿಕೆ ತೋಟಗಳ ಕೃಷಿಕರಿಗೆ ಉಂಟಾದ ನಷ್ಟವನ್ನು ಅಂದಾಜು ಮಾಡಿ ಪರಿಹಾರ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಶಿಫಾರ್ಸು ಮಾಡಲು ಆ ರಾಜ್ಯದ ಕೃಷಿ ಅಡಿಷನಲ್ ಡೈರೆಕ್ಟರರ ನೇತೃತ್ವದಲ್ಲಿ ನೇಮಕವಾಗಿದ್ದ ಸಮಿತಿ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿದೆಯಂತೆ.

ವರದಿಯ ಮುಖ್ಯ ಶಿಫಾರ್ಸುಗಳು:— ನಾಶವಾದ ಪ್ರತಿ ಅಡಿಕೆ ಮರಕ್ಕೆ ೫೦ ರೂ. ಪರಿಹಾರ, ಅಡಿಕೆ ಕೃಷಿ ಅಭಿವೃದ್ಧಿಗೆ ಸಾಲ ಸೌಲಭ್ಯ, ಕೊಳವೆ ಬಾವಿಗಳನ್ನು ತೋಡಿಕೊಳ್ಳಲು ಆರ್ಥಿಕ ಸಹಾಯ, ನೀರಾವರಿಗೆ ವಿದ್ಯುತ್ ಪೂರೈಕೆ, ಬೆಳೆ ವಿಮಾ ಪದ್ಧತಿಯ ಅನುಷ್ಠಾನ, ಇತ್ಯಾದಿ.

ನಮ್ಮ ಮಲೆನಾಡಲ್ಲೂ ೧೯೮೨–೮೩ರ ಬೇಸಿಗೆಯಲ್ಲಿ ಒಂದು ಮಳೆಯೂ ಬಾರದೆ ಅಡಿಕೆ ತೋಟಗಳೆಲ್ಲ ಬಹಳ ಹಾನಿಗೀಡಾದವು. ಚಿಕ್ಕಮಗಳೂರು ಜಿಲ್ಲಾ ಅಡಿಕೆ ಬೆಳೆಗಾರರ ಸಂಘದ ಒಂದು ನಿಯೋಗ ಬೆಂಗಳೂರವರೆಗೂ ಹೋಗಿ, 'ಸ್ವತಃ ಅಡಿಕೆ ಕೃಷಿಯ ಕಷ್ಟ-ಸುಖ ಬಲ್ಲ' ಮುಖ್ಯ ಮಂತ್ರಿ (ಆಗ ತಾನೇ ಅಧಿಕಾರಕ್ಕೆ ಬಂದಿದ್ದ) ರಾಮಕೃಷ್ಣ ಹೆಗ್ಗಡೆಯನ್ನು ಆಸೆಗಣ್ಣಿನಿಂದ 'ಕಂಡಿತು.' ಸಹಾನುಭೂತಿಯಿಂದ ಪರಿಶೀಲನೆ ನಡೆಸಿ ಸಂತ್ರಸ್ತರಿಗೆ ನೆರವಾಗುವ ಭರವಸೆ ಪಡೆದು ಬಂತು.

ಕೊಪ್ಪದ ತೋಟಗಾರಿಕೆ ಅಧಿಕಾರಿಗಳಿಗೆ ಅಡಿಕೆ ಬೆಳೆಯ ನಷ್ಟವನ್ನು ಸಮಗ್ರವಾಗಿ ಪರಿಶೀಲಿಸಿ ವರದಿ ಕಳಿಸುವಂತೆ ಆದೇಶ ಬಂತು. ಬೆಳೆಗಾರರ ಸಂಘ ಸಂತ್ರಸ್ತ ಬೆಳೆಗಾರರಿಂದ ೧೬೭೧ ಅರ್ಜಿಗಳನ್ನು ಸಲ್ಲಿಸಿತು. ಬೇರೆಯೂ ಇನ್ನಷ್ಟು ಅರ್ಜಿಗಳು ಸಲ್ಲಿಸಲ್ಪಟ್ಟವು. ಸಂತ್ರಸ್ತರು ಪರಿಹಾರಕ್ಕಾಗಿ ಕಾದರು. ಅದು ಮಾತ್ರ ಬರಲಿಲ್ಲ.

ನಂತರ ಸಂಘದವರಿಗೆ ತಿಳಿದುಬಂದಂತೆ, ಅಧಿಕಾರಿಗಳು ಕೇವಲ ಶೇ. ೮ ರಿಂದ ೧೫ರಷ್ಟು ಮಾತ್ರ ನಷ್ಟವಾಗಿದೆಯೆಂದು ವರದಿ ಸಲ್ಲಿಸಿದ್ದಾರಂತೆ. ಕೇಳಿದರೆ, 'ನಾವು ಗ್ರಾಮವಾರು ಪರಿಶೀಲನೆ ಮಾಡಿದ್ದೇವೆ. ... ಪರಿಶೀಲನೆ ಮಾಡಿಯೇ ವರದಿ ಸಲ್ಲಿಸಿದ್ದೇವೆ' ಎನ್ನುತ್ತಾರಂತೆ. ಆದರೆ ಪರಿಹಾರ ... ಬೇಕಾಗಿರುವುದು ಯಾರ್ಯಾರಿಗೆ ತಿಳಿದಿಲ್ಲ.

(ಎನ್. ಭಟ್ಟ)

## ಓದುಗರ ಪತ್ರಗಳು

### “ಈ ಬಸ್ಸು ಕೊಪ್ಪದವರೆಗೂ ಓಡಾಡಲಿ”

ಮಾನ್ಯರೆ,

ಕೊಪ್ಪದಿಂದ ತೀರ್ಥಹಳ್ಳಿ, ನಗರ, ಹೊಸನಗರ, ಸಾಗರ ಮಾರ್ಗವಾಗಿ ಸಿದ್ದಾಪುರಕ್ಕೆ ಒಂದು ಎಕ್ಸ್‌ಪ್ರೆಸ್ ಬಸ್ ಪರವಾನಗಿಯನ್ನು ಶ್ರೀ ವರಪಾ ಮೋಟಾರ್ಸ್‌ನವರು ಪಡೆದು ಕೆಲಕಾಲ ಓಡಿಸುತ್ತಿದ್ದರು. ಈಗ ಶ್ರೀ ರಾಧಾಕೃಷ್ಣ ಮೋಟಾರ್ಸ್‌ನವರು ಸದ್ರಿ ಸರ್ವಿಸನ್ನು ಓಡಿಸುತ್ತಿದ್ದು ಅವರು ತೀರ್ಥಹಳ್ಳಿಯಿಂದಲೇ ವಾಪಾಸು ಹೋಗುತ್ತಿದ್ದಾರೆ.

ಈ ಬಸ್ಸು ಕೊಪ್ಪದವರೆಗೆ ಓಡಾಡಿದರೆ ನಗರ, ಹೊಸನಗರ, ಸಾಗರ ಕಡೆಗೆ ಹೋಗುವ ಪ್ರಯಾಣಿಕರಿಗೆ ಬಹಳ ಅನುಕೂಲವಾಗುತ್ತದೆ. ಆ ಕಡೆಗೆ ಕೊಪ್ಪದಿಂದ ನೇರವಾಗಿ ಯಾವ ಬಸ್ಸೂ ಇಲ್ಲ.

ಬಸ್‌ನವರು ನಾಲ್ಕು ದಿನ ಓಡಿಸಿ, ‘ಕಲೆಕ್ಷನ್ ಇಲ್ಲ. ನಷ್ಟ’ ಎಂದು ಹೇಳಿ ನಿಲ್ಲಿಸುವುದು ವಾಡಿಕೆ. ಆದರೆ, ಬಸ್ಸು ಹೊತ್ತಿಗೆ ಸರಿಯಾಗಿ ಓಡಾಡಿ ಸ್ವಲ್ಪ ದಿನ ಪ್ರಚಾರವಾದರೆ ಈ ಮಾರ್ಗದ, ಈ ವೇಳೆಯ ಎಕ್ಸ್‌ಪ್ರೆಸ್ ಬಸ್ಸಿಗೆ ನಷ್ಟವಾಗುವ ಸಾಧ್ಯತೆಯೇ ಇಲ್ಲ.

ಸಂಬಂಧಪಟ್ಟವರು ಕೂಡಲೇ ಈ ಬಸ್ ಕೊಪ್ಪದವರೆಗೆ ಓಡಾಡುವಂತೆ ಸೂಕ್ತ ಏರ್ಪಾಡು ಮಾಡಿ ಕೊಪ್ಪದ ಜನತೆಗೆ ಸಂಚಾರ ಸೌಕರ್ಯ ಕಲ್ಪಿಸಬೇಕಾಗಿ ಪ್ರಾರ್ಥನೆ.

—ಹವಿವುದ್, ಕೊಪ್ಪ.

### ಆಶ್ವಾಸನೆ ಕೊಟ್ಟಿದ್ದು ಹೀಗೆ...

ಮಾನ್ಯರೆ,

ನಿಮ್ಮ ೧೬-೯-೮೪ರ ಸಂಚಿಕೆಯ ‘ಆಶ್ವಾಸನೆಯೂ ಮಂತ್ರಿಗಳ ಜೊತೆಗೇ ಹೋಯಿತೆ?’ ಎಂಬ ಪತ್ರಕ್ಕೆ ಈ ಪ್ರತಿಕ್ರಿಯೆ:

ಆಗ ಲೋಕೋಪಯೋಗಿ ಮಂತ್ರಿಗಳಾಗಿದ್ದ ದೇವೇಗೌಡರ ಕಾರ್ಯಕ್ರಮದಲ್ಲಿ ಕೊಪ್ಪ-ಸಿದ್ಧರಮಠ ರಸ್ತೆಗೆ ಟಾರು ಹಾಕಿಸಬೇಕೆಂದು ನಾವೇ ಮನವಿ ಕೊಟ್ಟಿದ್ದು ನಿಜ. ಆದರೆ ಮಂತ್ರಿಗಳು ಈ ವರ್ಷವೇ ಅರ್ಧ ದೂರಕ್ಕೆ ಟಾರು ಹಾಕಿಸುವುದಾಗಿ ಭರವಸೆ ಕೊಟ್ಟಿದ್ದಿಲ್ಲ, ಆದಷ್ಟು ಶೀಘ್ರವಾಗಿ ಸ್ವಲ್ಪ ಸ್ವಲ್ಪವಾಗಿ ಮಾಡಿಸುವ ಭರವಸೆ ಕೊಟ್ಟಿದ್ದರು. ಇದಕ್ಕಾಗಿ ಶಾಸಕರೂ ಈಗಾಗಲೇ ಸಾಕಷ್ಟು ಪ್ರಯತ್ನ ಮಾಡಿದ್ದು, ಮುಂದಿನ ವರ್ಷ ಸ್ವಲ್ಪ ದೂರಕ್ಕಾದರೂ ಟಾರು ಆಗುವುದೆಂಬ ಭರವಸೆ ನಮಗಿದೆ.

—ಜನತಾ ಪಕ್ಷದ ಕಾರ್ಯಕರ್ತರು,
ಕೆಸವೆ ಪಂಚಾಯ್ತಿ, ಕೊಪ್ಪ ತಾ॥

### ಕಲ್ಲುಗುಡ್ಡೆ ಗ್ರಾಮದಲ್ಲೂ ಹುಲಿ ಹಾವಳಿ

ಮಾನ್ಯರೆ,

ಕಲ್ಲುಗುಡ್ಡೆ ಗ್ರಾಮದ ಆಸುಪಾಸಿನಲ್ಲಿ—ಬಿಟ್ಟಿಕುಡಿಗೆ, ಹಾಲುಗೋಡು ಮುಂತಾದ ಕಡೆಗಳಲ್ಲಿ, ಈಗ್ಗೆ ೩-೪ ತಿಂಗಳಿಂದ ಹುಲಿ ಕಾಟ ಬಹಳವಾಗಿದ್ದು, ಜನ ಕಂಗಾಲಾಗಿದ್ದಾರೆ. ತಾಯಿ ಹುಲಿ ಮತ್ತು ೨ ಮರಿಗಳು ಇವೆಯೆಂದು ನೋಡಿದವರು ಹೇಳುತ್ತಾರೆ. ಗಾಡಿ ಎತ್ತು, ಕೋಣ, ಎಮ್ಮೆಗಳು ಸೇರಿದಂತೆ ಈಗಾಗಲೇ ಇವು ಸುಮಾರು ೨೫ ಜಾನುವಾರುಗಳನ್ನು ಆಹುತಿ ತೆಗೆದುಕೊಂಡಿವೆ. ನೊಂದವರು ಇದಕ್ಕೆ ಸಂಬಂಧಪಟ್ಟವರಿಗೆ ತಿಳಿಸಿದ್ದು, ಅವರ ಮಹಜರಿನಲ್ಲಿಯೇ ಇಷ್ಟು ಕಾಲ ಕಳೆದು ಹೋಯ್ತು. ಕಾಡು ಪ್ರಾಣಿಗಳನ್ನು ಕೊಲ್ಲುವುದು ಅಪರಾಧವಾಗಿರುವುದರಿಂದ ಹಳ್ಳಿಗರು ಏನೂ ಮಾಡಲಾರದವರಾಗಿದ್ದಾರೆ.

ಇನ್ನಾದರೂ ಸಂಬಂಧಪಟ್ಟವರು ಈ ಹುಲಿಗಳನ್ನು ಹಿಡಿದು ಅಭಯಾರಣ್ಯಗಳಿಗೆ ಸಾಗಿಸಲು ಶೀಘ್ರ ಕ್ರಮ ಕೈಗೊಂಡು ಹಳ್ಳಿಗರಿಗೊದಗಿರುವ ಆಪತ್ತನ್ನು ಪರಿಹರಿಸಲು ಕೋರುತ್ತೇನೆ.

—ಸಂಕಷ್ಟಕ್ಕೊಳಗಾದವರ ಪರವಾಗಿ
ಕೆ. ವೆ. ಗಣೇಶ ಉಡುಪ,
ಬಿಳಾಲುಕೊಪ್ಪ.

### ಅಕ್ಕಿ ಗಿರಣಿಯಲ್ಲಿ ರೈತರಿಗೆ ತೊಂದರೆ ತಪ್ಪಿಸಲು ಸಲಹೆ

ಮಾನ್ಯರೆ,

ಕೊಪ್ಪ ತಾ॥ ವ್ಯ.ಮಾ.ಸ. ಸಂಘದ (ತೀರ್ಥಹಳ್ಳಿ ರಸ್ತೆಯಲ್ಲಿರುವ) ಅಕ್ಕಿ ಗಿರಣಿಯಲ್ಲಿ ಸಾರ್ವಜನಿಕರು ಮತ್ತು ಸುತ್ತಮುತ್ತ ಹತ್ತಾರು ಹಳ್ಳಿಗಳ ರೈತರು ದೂರ ದೂರದಿಂದ ಬಂದು ಅಕ್ಕಿ ಮಾಡಿಸಿಕೊಳ್ಳಬೇಕಾಗಿರುತ್ತೆ. ಆದರೆ ಇಲ್ಲಿ ವ್ಯಾಪಾರಸ್ಥರು ನೂರಾರು ಕ್ವಿಂಟಾಲ್ ಭತ್ತವನ್ನು ದಿನವೂ ಅಕ್ಕಿ ಮಾಡಿಸುತ್ತಿರುತ್ತಾರೆ. ಇದರಿಂದ ರೈತರಿಗೆ ಮತ್ತು ಸಾರ್ವಜನಿಕರಿಗೆ ತುಂಬಾ ತೊಂದರೆಯಾಗಿದೆ.

ಆದ್ದರಿಂದ ವ್ಯಾಪಾರಸ್ಥರಿಗೆ ಹಾಗೂ ಸಾರ್ವಜನಿಕರು ಮತ್ತು ರೈತರಿಗೆ ಪ್ರತ್ಯೇಕವಾಗಿ ನಿರ್ದಿಷ್ಟ ದಿನವನ್ನು ಗೊತ್ತುಪಡಿಸಿ, ರೈತರಿಗಾಗುತ್ತಿರುವ ತೊಂದರೆಯನ್ನು ನಿವಾರಿಸಬೇಕಾಗಿ ಸಂಬಂಧಪಟ್ಟವರಲ್ಲಿ ವಿನಂತಿ.

—ನೊಂದ ರೈತರು,
(ಹಲವಾರು ಜನರ ಸಹಿಗಳಿವೆ)

### ಕಾಡು ಹಂದಿ ಕಾಟ

ಮಾನ್ಯರೆ,

ನಿಮ್ಮ ತಾ॥ ೩೦-೯-೮೪ರ ಪತ್ರಿಕೆಯಲ್ಲಿ ಓದುಗರೊಬ್ಬರು ಅಡಿಕೆ ತೋಟಗಳಿಗೆ ಆಗುತ್ತಿರುವ ಹಂದಿಗಳ ಹಾವಳಿಯನ್ನು ಪ್ರಸ್ತಾಪಿಸಿದ್ದಾರೆ.

ಇದರಲ್ಲಿ ಏನೂ ಉತ್ಪ್ರೇಕ್ಷೆಯಿಲ್ಲ. ಈ ಎರಡು ತಿಂಗಳಿಂದೀಚೆಗೆ ನನ್ನ ಒಂದೂವರೆ ಎಕರೆ ತೋಟದಲ್ಲಿ ಅಂಕ್ಯೂ ಹೆಚ್ಚು ಸಸಿಗಳು ಹಂದಿಗಳ ಪಾಲಾಗಿವೆ. ನಮ್ಮ ಅಣ್ಣ ತಮ್ಮಂದಿರದು ಒಟ್ಟು ೪ ಎಕರೆ ಕೋಗಿನಲ್ಲಿ ಕನಿಷ್ಠ ೩೦೦ ಸಸಿಗಳು ಹೋಗಿವೆ. ಎಲ್ಲ ಐದಾರು ವರ್ಷ ಬೆಳೆದ ಸಸಿಗಳೇ. ಇದಕ್ಕಿಂತ ಹೆಚ್ಚು ನಷ್ಟ ಹೊಂದಿದ ತೋಟಗಳೂ ಇವೆ. ಎಲ್ಲರ ತೋಟಗಳೂ ವ್ಯಾಪಕವಾಗಿ ಹಾನಿಗೀಡಾಗಿವೆ.

ಕಾಡು ಹಂದಿಗಳನ್ನು ಸಾಯಿಸುವಂತಿಲ್ಲ ಪರಿಹಾರವನ್ನೂ ಕೊಡುವವರಿಲ್ಲ. ನಾವು ಇಷ್ಟು ಅಪಾರ ನಷ್ಟ ತಾಳಿಕೊಳ್ಳುವುದು ಹೇಗೆ?

—ಹೆಚ್. ಆರ್. ಮಂಜಭಟ್ಟ,
ಕೊಪ್ಪ.

### ಯಕ್ಷಗಾನ ಶಿಕ್ಷಣ ಕೇಂದ್ರದ ೨ನೇ ವಾರ್ಷಿಕೋತ್ಸವ

ಹರಿಹರಪುರ: ಇಲ್ಲಿನ ಮಲೆನಾಡು ಯಕ್ಷಗಾನ ಕಲಾ ಶಿಕ್ಷಣ ಕೇಂದ್ರದ ೨ನೇ ವಾರ್ಷಿಕೋತ್ಸವ ಅ. ೭ರಂದು ಇಲ್ಲಿನ ಮಠಾಧೀಶರ ಸಮ್ಮುಖದಲ್ಲಿ ಪಿ. ಜಿ. ಗುರ್ಜರ್‌ರವರ ಅಧ್ಯಕ್ಷತೆಯಲ್ಲಿ ನಡೆಯಿತು. ಎ.ವಿ.ಆನಂದ ರಾಮ ಭಟ್ ಮುಖ್ಯ ಅತಿಥಿಯಾಗಿದ್ದು, ಜಿ. ಸುಬ್ಬರಾವ್ ಶಿಕ್ಷಣ ಮುಗಿಸಿದ ಅಭ್ಯರ್ಥಿಗಳಿಗೆ ಅರ್ಹತಾ ಪತ್ರ ನೀಡಿದರು.

ಕೇಂದ್ರದ ಕಲಾವಿದರ ಜೊತೆಗೆ ಕೆಲವು ಖ್ಯಾತ ಕಲಾವಿದರು ಅತಿಥಿಗಳಾಗಿ ಭಾಗವಹಿಸಿ, ‘ಶಿವ-ಆಂಜನೇಯ’ ಎಂಬ ತಾಳಮದ್ದಲೆ ನಡೆಯಿತು.

### ಅಡಿಕೆ ಬೆಳೆ ನಷ್ಟಕ್ಕೆ ಪರಿಹಾರ ....

(೧ನೇ ಪುಟದಿಂದ)

ವಾಗಿದೆಯೋ ಅಂಥವರಿಗೆ ಹೊರತು ಗ್ರಾಮವಾರು ಅಲ್ಲ. ಒಂದು ಗ್ರಾಮದಲ್ಲಿ ಕೆಲವರಿಗೆ ವಿಪರೀತ ನಷ್ಟವಾಗಿ ಉಳಿದವರಿಗೆ ಬಹಳ ಕಮ್ಮಿ ನಷ್ಟವಾಗಿರಬಹುದು (ನೀರಿನ ಸೌಕರ್ಯಕ್ಕನುಗುಣವಾಗಿ.) ಗ್ರಾಮವಾರು ಲೆಕ್ಕ ಹಿಡಿದರೆ ನಷ್ಟ ಲೆಕ್ಕಕ್ಕೇ ಸಿಗದೆ ಸಂತ್ರಸ್ತರಿಗೆ ಬಹಳ ಅನ್ಯಾಯವಾಗುವ ಸಾಧ್ಯತೆ ಹೆಚ್ಚು.

ಅಲ್ಲದೆ ಅಧಿಕಾರಿಗಳು ಯಾವಾಗ ಯಾವ್ಯಾವ ಗ್ರಾಮಕ್ಕೆ ಭೇಟಿ ಕೊಟ್ಟಿದ್ದರೆಂಬುದೂ ಸಂಘದವರಿಗೆ ಒಗಟಾಗಿದೆಯಂತೆ.

ಅಲ್ಲಿನ ಸರ್ಕಾರ ಮತ್ತು ಅದರ ಅಧಿಕಾರಿಗಳು ಹಾಗೂ ಇಲ್ಲಿನ ಸರ್ಕಾರ ಮತ್ತು ಅಧಿಕಾರಿಗಳು—ಇವೆರಡರ ನಡುವಿನ ಮನೋಭಾವದ ಅಂತರ ಹೀಗಿದೆ.

ಇದೇ ೮೨-೮೩ರ ಅವಧಿಯಲ್ಲಿ ದ.ಕ.ಜಿಲ್ಲೆಯಲ್ಲೂ ತೋಟಗಳು ನಷ್ಟಕ್ಕೀಡಾದ ಬಗ್ಗೆ ಪುಣಚಾ ಗ್ರಾಮದ ಬೆಳೆಗಾರರು ಅ. ಭಾ. ಅಡಿಕೆ ಬೆಳೆಗಾರರ ಸಂಘ, ದ. ಕ. ಡಿಸಿಸಿ ಬ್ಯಾಂಕ್ ಮತ್ತು ಶಾಸಕರ ಮೂಲಕ ನಡೆಸಿದ ಪ್ರಯತ್ನಗಳ ಫಲವಾಗಿ ಅಲ್ಲಿನ ೮ ತಾ॥ ಗಳಿಗೆ ಅನ್ವಯಿಸುವಂತೆ ‘ನಬಾರ್ಡ್’ನಿಂದ ವ್ಯಾಪಕ ಪ್ರಯೋಜನವುಳ್ಳ ದೀರ್ಘಾವಧಿ ಅಭಿವೃದ್ಧಿ ಸಾಲಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. (ಅಕ್ಟೋಬರ್ ೧೦ರ ‘ಮುಂಗಾರು’ ದಿನಪತ್ರಿಕೆ ನೋಡಿ.)

### ಶಾರದಾ ಮಹೋತ್ಸವ

ಶೃಂಗೇರಿ: ಇಲ್ಲಿನ ಶಾರದಾ ಯುವಕ ಕಲಾ ಸಂಘ ಅ. ೬. ೭ರಂದು ಶಾರದಾ ಮಹೋತ್ಸವ ಆಚರಿಸಿತು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶೃಂಗೇರಿಯ ಮೈಸೂರು ಬ್ಯಾಂಕ್ ಮ್ಯಾನೇಜರ್ ಸೀತಾರಾಂ ವಹಿಸಿದ್ದು ನಾರ್ವೆ ಪ್ರೌಢಶಾಲೆ ಮುಖ್ಯೋಪಾಧ್ಯಾಯ ಯೋಗಪ್ಪ ಬಹುಮಾನ ಹಂಚಿದರು. ಬೇಲೂರು ಕೃಷ್ಣಮೂರ್ತಿ, ಪಿ. ತಿಮ್ಮಪ್ಪ. ಕಲಬಿ ಶ್ರೀನಿವಾಸ್ ಮುಖ್ಯ ಅತಿಥಿಗಳಾಗಿದ್ದರು.

ಮಹೋತ್ಸವದ ಅಂಗವಾಗಿ ಜಿಲ್ಲಾ ಮಟ್ಟದ ಭಕ್ತಿ ಗೀತೆ, ಭಾವ ಗೀತೆ, ಆಶು ಭಾಷಣ ಸ್ಪರ್ಧೆಗಳು ನಡೆದವು. ಹರಿಕಥೆ, ನಾಟಕ ಮತ್ತಿತರ ಮನರಂಜನೆ ಕಾರ್ಯಕ್ರಮಗಳು ನಡೆದವು.

### ಶೃಂಗೇರಿ ಭೂ ಬ್ಯಾಂಕಿನಿಂದ ಶೇ. ೮ ಡಿವಿಡೆಂಡ್

ಶೃಂಗೇರಿ: ಇಲ್ಲಿನ ಭೂ ಅಭಿವೃದ್ಧಿ ಬ್ಯಾಂಕಿನ ವಿಶೇಷ ಮಹಾ ಸಭೆ ಅಧ್ಯಕ್ಷ ಡಾ॥ ಹುಲ್ಸೆ ಮಂಜಪ್ಪ ಗೌಡರ ಅಧ್ಯಕ್ಷತೆಯಲ್ಲಿ ಈಚೆಗೆ ನಡೆಯಿತು. ಬ್ಯಾಂಕು ಕಳೆದ ವರ್ಷ ೩೫,೦೦೦ ರೂ.ಗಳ ಲಾಭ ಗಳಿಸಿದ್ದು, ವಿವಿಧ ಬಾಬುಗಳಿಗೆ ಲಾಭಾಂಶ ಭರ್ತಿ ಮಾಡಿ ಉಳಿದ ಹಣದಿಂದ ಸದಸ್ಯರಿಗೆ ಶೇ. ೮ರಂತೆ ಡಿವಿಡೆಂಡ್ ಹಂಚಲು ಸಭೆ ಒಪ್ಪಿತು. ಸರಕಾರದ ಆದೇಶದಂತೆ ಬ್ಯಾಂಕಿನ ಬೈಲಾ ತಿದ್ದುಪಡಿ ಮಾಡಲೂ ಅನುಮೋದಿಸಿತು.

### ಬರಿಗಾಲು ವೈದ್ಯರ ಸಂಘಟನೆ

ಚಿಕ್ಕಮಗಳೂರು: ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ ದುಡಿಯುತ್ತಿರುವ ‘ಬರಿಗಾಲು ವೈದ್ಯ’ರುಗಳಿಗೆ ಸರ್ಕಾರ ಕೊಡುತ್ತಿರುವ ಗೌರವಧನ ತೀರಾ ಕಡಿಮೆಯಿದ್ದು ಅವರ ಸ್ಥಿತಿಗತಿ ಬಹಳ ಕಷ್ಟಕರವಾಗಿದೆ. ಅವರ ಸಮಸ್ಯೆಗಳನ್ನು ಸರ್ಕಾರಕ್ಕೆ ವಿವರಿಸಿ ಬಗೆಹರಿಸಿಕೊಳ್ಳಲು ಸಂಘಟನೆ ಬೇಕಾಗಿದ್ದು ಎ.ಐ.ಟಿ.ಯು.ಸಿ. ಜಿಲ್ಲಾ ಘಟಕ ಇವರ ಸಂಘಟನೆ ಮಾಡಲು ನಿರ್ಧರಿಸಿರುವುದಾಗಿ ಪ್ರಕಟಣೆಯೊಂದು ತಿಳಿಸಿದೆ.

### ಅ. ಭಾ. ವಿ. ಪ. ಪ್ರಾಂತೀಯ ವಿದ್ಯಾರ್ಥಿ ಸಮ್ಮೇಳನ

ಕೊಪ್ಪ: ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್ತಿನ ಪ್ರಾಂತೀಯ ಸಮ್ಮೇಳನ ಬೆಂಗಳೂರಿನಲ್ಲಿ ಅ. ೧೯ ಮತ್ತು ೨೦ರಂದು ನಡೆಯುತ್ತದೆ. ಕೊಪ್ಪ ಶಾಖೆಯಿಂದ ೧೦ ಜನ ವಿದ್ಯಾರ್ಥಿಗಳು ಭಾಗವಹಿಸುತ್ತಾರೆ.

ಇದೇ ಸಂದರ್ಭದಲ್ಲಿ ಅವರು ವಿದ್ಯಾ ಮಂತ್ರಿ ರಘುಪತಿಯವರನ್ನು ಕಂಡು ಇಲ್ಲಿನ ಪ್ರ. ದ. ಕಾಲೇಜಿನ ಸಮಸ್ಯೆಗಳನ್ನು ಬಗೆಹರಿಸುವಂತೆ ಒತ್ತಾಯಿಸುವರು.

### ಮಲೆನಾಡು ಯಕ್ಷಗಾನ ಕಲಾ ಶಿಕ್ಷಣ ಕೇಂದ್ರ, ಹರಿಹರಪುರ.

ತಾ॥ ೬-೧೦-೮೪ ರಂದು ನಡೆದ ಆದ್ಯಬಹುಮಾನ ಯೋಜನೆ ಡ್ರಾ ಫಲಿತಾಂಶ

| | | |
|---|---|---|
| ಮೊದಲ ಬಹುಮಾನ | .... | 1698 |
| 2ನೇ | ” .... | 1542 |
| 3ನೇ | ” .... | 211 |
| 4ನೇ | ” .... | 601 |
| 5ನೇ | ” .... | 2297 |
| 6ನೇ | ” .... | 2505 |

(ವಿಜೇತರು ಬಹುಮಾನಗಳನ್ನು ನವೆಂಬರ್ 6 ರೊಳಗಾಗಿ ಕಾರ್ಯದರ್ಶಿಗಳಿಂದ ಪಡೆದುಕೊಳ್ಳಬೇಕು.)

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಿಕಾ ಅಚ್ಚುಕೂಟ, ಕೊಪ್ಪ. ಶೃಂಗೇರಿ ಪ್ರತಿನಿಧಿ: ಕಲ್ಕುಳಿ ವಿಠಲ ಹೆಗ್ಡೆ

## ಓದುಗರ ಪತ್ರಗಳು

### "ಈ ಬಸ್ಸು ಕೊಪ್ಪದವರೆಗೂ ಓಡಾಡಲಿ"

ಮಾನ್ಯರೆ,

ಕೊಪ್ಪದಿಂದ ತೀರ್ಥಹಳ್ಳಿ, ನಗರ, ಹೊಸನಗರ, ಸಾಗರ ಮಾರ್ಗವಾಗಿ ಸಿದ್ದಾಪುರಕ್ಕೆ ಒಂದು **ಎಕ್ಸ್‌ಪ್ರೆಸ್** ಬಸ್ ಪರವಾನಗಿಯನ್ನು ಶ್ರೀ ವರದಾ ಮೋಟಾರ್ಸ್‌ನವರು ಪಡೆದು ಕೆಲಕಾಲ ಓಡಿಸುತ್ತಿದ್ದರು. ಈಗ ಶ್ರೀ ರಾಧಾಕೃಷ್ಣ ಮೋಟಾರ್ಸ್‌ನವರು ಸದ್ರಿ ಸರ್ವಿಸನ್ನು ಓಡಿಸುತ್ತಿದ್ದು ಅವರು ತೀರ್ಥಹಳ್ಳಿಯಿಂದಲೇ ವಾಪಾಸು ಹೋಗುತ್ತಿದ್ದಾರೆ.

ಈ ಬಸ್ಸು ಕೊಪ್ಪದವರೆಗೆ ಓಡಾಡಿದರೆ ನಗರ, ಹೊಸನಗರ, ಸಾಗರ ಕಡೆಗೆ ಹೋಗುವ ಪ್ರಯಾಣಿಕರಿಗೆ ಬಹಳ ಅನುಕೂಲವಾಗುತ್ತದೆ. ಆ ಕಡೆಗೆ ಕೊಪ್ಪದಿಂದ ನೇರವಾಗಿ ಯಾವ ಬಸ್ಸೂ ಇಲ್ಲ.

ಬಸ್‌ನವರು ನಾಲ್ಕು ದಿನ ಓಡಿಸಿ, 'ಕಲೆಕ್ಷನ್ ಇಲ್ಲ. ನಷ್ಟ' ಎಂದು ಹೇಳಿ ನಿಲ್ಲಿಸುವುದು ವಾಡಿಕೆ. ಆದರೆ, ಬಸ್ಸು ಹೊತ್ತಿಗೆ ಸರಿಯಾಗಿ ಓಡಾಡಿ ಸ್ವಲ್ಪ ದಿನ ಪ್ರಚಾರವಾದರೆ ಈ ಮಾರ್ಗದ, ಈ ವೇಳೆಯ ಎಕ್ಸ್‌ಪ್ರೆಸ್ ಬಸ್ಸಿಗೆ ನಷ್ಟವಾಗುವ ಸಾಧ್ಯತೆಯೇ ಇಲ್ಲ.

ಸಂಬಂಧಪಟ್ಟವರು ಕೂಡಲೇ ಈ ಬಸ್ ಕೊಪ್ಪದವರೆಗೆ ಓಡಾಡುವಂತೆ ಸೂಕ್ತ ಏರ್ಪಾಡು ಮಾಡಿ ಕೊಪ್ಪದ ಜನತೆಗೆ ಸಂಚಾರ ಸೌಕರ್ಯ ಕಲ್ಪಿಸಬೇಕಾಗಿ ಪ್ರಾರ್ಥನೆ.

—**ಹವಿಊದ್**, ಕೊಪ್ಪ.

### ಆಶ್ವಾಸನೆ ಕೊಟ್ಟಿದ್ದು ಹೀಗೆ...

ಮಾನ್ಯರೆ,

ನಿಮ್ಮ ೧೬.೯.೮೪ರ ಸಂಚಿಕೆಯ 'ಆಶ್ವಾಸನೆಯೂ ಮಂತ್ರಿಗಳ ಜೊತೆಗೇ ಹೋಯಿತೆ?' ಎಂಬ ಪತ್ರಕ್ಕೆ ಈ ಪ್ರತಿಕ್ರಿಯೆ:

ಆಗ ಲೋಕೋಪಯೋಗಿ ಮಂತ್ರಿಗಳಾಗಿದ್ದ ದೇವೇಗೌಡರ ಕಾರ್ಯಕ್ರಮದಲ್ಲಿ ಕೊಪ್ಪ-ಸಿದ್ಧರಮಠ ರಸ್ತೆಗೆ ಟಾರು ಹಾಕಿಸಬೇಕೆಂದು ನಾವೇ ಮನವಿ ಕೊಟ್ಟಿದ್ದು ನಿಜ. ಆದರೆ ಮಂತ್ರಿಗಳು ಈ ವರ್ಷವೇ ಅರ್ಧ ದೂರಕ್ಕೆ ಟಾರು ಹಾಕಿಸುವುದಾಗಿ ಭರವಸೆ ಕೊಟ್ಟಿದ್ದಲ್ಲ, ಆದಷ್ಟು ಶೀಘ್ರವಾಗಿ ಸ್ವಲ್ಪ ಸ್ವಲ್ಪವಾಗಿ ಮಾಡಿಸುವ ಭರವಸೆ ಕೊಟ್ಟಿದ್ದರು. ಇದಕ್ಕಾಗಿ ಶಾಸಕರೂ ಈಗಾಗಲೇ ಸಾಕಷ್ಟು ಪ್ರಯತ್ನ ಮಾಡಿದ್ದು, ಮುಂದಿನ ವರ್ಷ ಸ್ವಲ್ಪ ದೂರಕ್ಕಾದರೂ ಟಾರು ಆಗುವುದೆಂಬ ಭರವಸೆ ನಮಗಿದೆ.

—**ಜನತಾ ಪಕ್ಷದ ಕಾರ್ಯಕರ್ತರು,**
ಕೆಸವೆ ಪಂಚಾಯ್ತಿ, ಕೊಪ್ಪ ತಾ||

### ಕಲ್ಲುಗುಡ್ಡೆ ಗ್ರಾಮದಲ್ಲೂ ಹುಲಿ ಹಾವಳಿ

ಮಾನ್ಯರೆ,

ಕಲ್ಲುಗುಡ್ಡೆ ಗ್ರಾಮದ ಆಸುಪಾಸಿನಲ್ಲಿ—ಬಿಟ್ಟಿಕುಡಿಗೆ, ಹಾಲುಗೋಡು ಮುಂತಾದ ಕಡೆಗಳಲ್ಲಿ, ಈಗ್ಗೆ ೩-೪ ತಿಂಗಳಿಂದ ಹುಲಿ ಕಾಟ ಬಹಳವಾಗಿದ್ದು, ಜನ ಕಂಗಾಲಾಗಿದ್ದಾರೆ. ತಾಯಿ ಹುಲಿ ಮತ್ತು ೨ ಮರಿಗಳು ಇವೆಯೆಂದು ನೋಡಿದವರು ಹೇಳುತ್ತಾರೆ. ಗಾಡಿ ಎತ್ತು, ಕೋಣ, ಎಮ್ಮೆಗಳು ಸೇರಿದಂತೆ ಈಗಾಗಲೇ ಇವು ಸುಮಾರು ೨೫ ಜಾನುವಾರುಗಳನ್ನು ಆಹುತಿ ತೆಗೆದುಕೊಂಡಿವೆ. ನೊಂದವರು ಇದಕ್ಕೆ ಸಂಬಂಧಪಟ್ಟವರಿಗೆ ತಿಳಿಸಿದ್ದು, ಅವರ ಮಹಜರಿನಲ್ಲಿಯೇ ಇಷ್ಟು ಕಾಲ ಕಳೆದು ಹೋಯ್ತು. ಕಾಡು ಪ್ರಾಣಿಗಳನ್ನು ಕೊಲ್ಲುವುದು ಅಪರಾಧವಾಗಿರುವುದರಿಂದ ಹಳ್ಳಿಗರು ಏನೂ ಮಾಡಲಾರದವರಾಗಿದ್ದಾರೆ.

ಇನ್ನಾದರೂ ಸಂಬಂಧಪಟ್ಟವರು ಈ ಹುಲಿಗಳನ್ನು ಹಿಡಿದು ಅಭಯಾರಣ್ಯಗಳಿಗೆ ಸಾಗಿಸಲು ಶೀಘ್ರ ಕ್ರಮ ಕೈಗೊಂಡು ಹಳ್ಳಿಗರಿಗೊದಗಿರುವ ಆಪತ್ತನ್ನು ಪರಿಹರಿಸಲು ಕೋರುತ್ತೇನೆ.

—ಸಂಕಷ್ಟಕ್ಕೊಳಗಾದವರ ಪರವಾಗಿ
**ಕೊ. ವೆ. ಗಣೇಶ ಉಡುಪ,**
ಬಿಳಾಲುಕೊಪ್ಪ.

### ಅಕ್ಕಿ ಗಿರಣಿಯಲ್ಲಿ ರೈತರಿಗೆ ತೊಂದರೆ ತಪ್ಪಿಸಲು ಸಲಹೆ

ಮಾನ್ಯರೆ,

ಕೊಪ್ಪ ತಾ|| ವ್ಯ.ಮಾ.ಸ. ಸಂಘದ (ತೀರ್ಥಹಳ್ಳಿ ರಸ್ತೆಯಲ್ಲಿರುವ) ಅಕ್ಕಿ ಗಿರಣಿಯಲ್ಲಿಸಾರ್ವಜನಿಕರು ಮತ್ತುಸುತ್ತಮುತ್ತ ಹತ್ತಾರು ಹಳ್ಳಿಗಳ ರೈತರು ದೂರ ದೂರದಿಂದ ಬಂದು ಅಕ್ಕಿ ಮಾಡಿಸಿಕೊಳ್ಳಬೇಕಾಗಿರುತ್ತೆ. ಆದರೆ ಇಲ್ಲಿ ವ್ಯಾಪಾರಸ್ಥರು ನೂರಾರು ಕ್ವಿಂಟಾಲ್ ಭತ್ತವನ್ನು ದಿನವೂ ಅಕ್ಕಿ ಮಾಡಿಸುತ್ತಿರುತ್ತಾರೆ. ಇದರಿಂದ ರೈತರಿಗೆ ಮತ್ತು ಸಾರ್ವಜನಿಕರಿಗೆ ತುಂಬಾ ತೊಂದರೆಯಾಗಿದೆ.

ಆದ್ದರಿಂದ ವ್ಯಾಪಾರಸ್ಥರಿಗೆ ಹಾಗೂ ಸಾರ್ವಜನಿಕರು ಮತ್ತು ರೈತರಿಗೆ ಪ್ರತ್ಯೇಕವಾಗಿ ನಿರ್ದಿಷ್ಟ ದಿನವನ್ನು ಗೊತ್ತುಪಡಿಸಿ, ರೈತರಿಗಾಗುತ್ತಿರುವ ತೊಂದರೆಯನ್ನು ನಿವಾರಿಸಬೇಕಾಗಿ ಸಂಬಂಧಪಟ್ಟವರಲ್ಲಿ ವಿನಂತಿ.

—**ನೊಂದ ರೈತರು,**
(ಹಲವಾರು ಜನರ ಸಹಿಗಳಿವೆ)

### ಕಾಡು ಹಂದಿ ಕಾಟ

ಮಾನ್ಯರೆ,

ನಿಮ್ಮ ತಾ|| ೩೦-೯-೮೪ರ ಪತ್ರಿಕೆಯಲ್ಲಿ ಓದುಗರೊಬ್ಬರು ಅಡಿಕೆ ತೋಟಗಳಿಗೆ ಆಗುತ್ತಿರುವ ಹಂದಿಗಳ ಹಾವಳಿಯನ್ನು ಪ್ರಸ್ತಾಪಿಸಿದ್ದಾರೆ.

ಇದರಲ್ಲಿ ಏನೂ ಉತ್ಪ್ರೇಕ್ಷೆಯಿಲ್ಲ. ಈ ಎರಡು ತಿಂಗಳಿಂದೀಚೆಗೆ ನನ್ನ ಒಂದೂವರೆ ಎಕರೆ ತೋಟದಲ್ಲಿ ಲಂಕ್ಷ್ಯಾ ಹೆಚ್ಚು ಸಸಿಗಳು ಹಂದಿಗಳ ಪಾಲಾಗಿವೆ. ನಮ್ಮ ಅಣ್ಣ ತಮ್ಮಂದಿರದು ಒಟ್ಟು ೪ ಎಕರೆ ಕೋಗಿನಲ್ಲಿ ಕನಿಷ್ಠ ೩೦೦ ಸಸಿಗಳು ಹೋಗಿವೆ. ಎಲ್ಲ ಐದಾರು ವರ್ಷ ಬೆಳೆದ ಸಸಿಗಳೇ. ಇದಕ್ಕಿಂತ ಹೆಚ್ಚು ನಷ್ಟ ಹೊಂದಿದ ತೋಟಗಳೂ ಇವೆ. ಎಲ್ಲರ ತೋಟಗಳೂ ವ್ಯಾಪಕವಾಗಿ ಹಾನಿಗೀಡಾಗಿವೆ.

ಕಾಡು ಹಂದಿಗಳನ್ನು ಸಾಯಿಸುವಂತಿಲ್ಲ ಪರಿಹಾರವನ್ನೂ ಕೊಡುವವರಿಲ್ಲ. ನಾವು ಇಷ್ಟು ಅಪಾರ ನಷ್ಟ ತಾಳಿಕೊಳ್ಳುವುದು ಹೇಗೆ?

—**ಹೆಚ್. ಆರ್. ಮಂಜಭಟ್ಟ,**
ಕೊಪ್ಪ.

## ಯಕ್ಷಗಾನ ಶಿಕ್ಷಣ ಕೇಂದ್ರದ ೨ನೇ ವಾರ್ಷಿಕೋತ್ಸವ

ಹರಿಹರಪುರ: ಇಲ್ಲಿನ ಮಲೆನಾಡು ಯಕ್ಷಗಾನ ಕಲಾ ಶಿಕ್ಷಣ ಕೇಂದ್ರದ ೨ನೇ ವಾರ್ಷಿಕೋತ್ಸವ ಅ. ೭ರಂದು ಇಲ್ಲಿನ ಮಠಾಧೀಶರ ಸಮ್ಮುಖದಲ್ಲಿ ಪಿ. ಜಿ. ಗುರ್ಜರ್ ರವರ ಅಧ್ಯಕ್ಷತೆಯಲ್ಲಿ ನಡೆಯಿತು. ಎ.ವಿ.ಆನಂದರಾಮ ಭಟ್ ಮುಖ್ಯ ಅತಿಥಿಯಾಗಿದ್ದು, ಜಿ. ಸುಬ್ಬರಾವ್ ಶಿಕ್ಷಣ ಮುಗಿಸಿದ ಅಭ್ಯರ್ಥಿಗಳಿಗೆ ಅರ್ಹತಾ ಪತ್ರ ನೀಡಿದರು.

ಕೇಂದ್ರದ ಕಲಾವಿದರ ಜೊತೆಗೆ ಕೆಲವು ಖ್ಯಾತ ಕಲಾವಿದರು ಅತಿಥಿಗಳಾಗಿ ಭಾಗವಹಿಸಿ, 'ಶಿವ-ಆಂಜನೇಯ' ಎಂಬ ತಾಳಮದ್ದಲೆ ನಡೆಯಿತು.

## ಶೃಂಗೇರಿ ಭೂ ಬ್ಯಾಂಕಿನಿಂದ ಶೇ. ೮ ಡಿವಿಡೆಂಡ್

ಶೃಂಗೇರಿ: ಇಲ್ಲಿನ ಭೂ ಅಭಿವೃದ್ಧಿ ಬ್ಯಾಂಕಿನ ವಿಶೇಷ ಮಹಾ ಸಭೆ ಅಧ್ಯಕ್ಷ ಡಾ|| ಹುಲ್ಸೆ ಮಂಜಪ್ಪ ಗೌಡರ ಅಧ್ಯಕ್ಷತೆಯಲ್ಲಿ ಈಚೆಗೆ ನಡೆಯಿತು. ಬ್ಯಾಂಕು ಕಳೆದ ವರ್ಷ ೫೫,೦೦೦ ರೂ.ಗಳ ಲಾಭ ಗಳಿಸಿದ್ದು, ವಿವಿಧ ಬಾಬುಗಳಿಗೆ ಲಾಭಾಂಶ ಭರ್ತಿ ಮಾಡಿ ಉಳಿದ ಹಣದಿಂದ ಸದಸ್ಯರಿಗೆ ಶೇ. ೮ರಂತೆ ಡಿವಿಡೆಂಡ್ ಹಂಚಲು ಸಭೆ ಒಪ್ಪಿತು. ಸರಕಾರದ ಆದೇಶದಂತೆ ಬ್ಯಾಂಕಿನ ಬೈಲಾ ತಿದ್ದುಪಡಿ ಮಾಡಲೂ ಅನುಮೋದಿಸಿತು.

## ಅಡಿಕೆ ಬೆಳೆ ನಷ್ಟಕ್ಕೆ ಪರಿಹಾರ ....

(೧ನೇ ಪುಟದಿಂದ)

ವಾಗಿದೆಯೋ ಅಂಥವರಿಗೆ ಹೊರತು ಗ್ರಾಮವಾರು ಅಲ್ಲ. ಒಂದು ಗ್ರಾಮದಲ್ಲಿ ಕೆಲವರಿಗೆ ವಿಪರೀತ ನಷ್ಟವಾಗಿ ಉಳಿದವರಿಗೆ ಬಹಳ ಕಮ್ಮಿ ನಷ್ಟವಾಗಿರಬಹುದು (ನೀರಿನ ಸೌಕರ್ಯಕ್ಕನುಗುಣವಾಗಿ.) ಗ್ರಾಮವಾರು ಲೆಕ್ಕ ಹಿಡಿದರೆ ನಷ್ಟ ಲೆಕ್ಕಕ್ಕೇ ಸಿಗದೆ ಸಂತ್ರಸ್ತರಿಗೆ ಬಹಳ ಅನ್ಯಾಯವಾಗುವ ಸಾಧ್ಯತೆ ಹೆಚ್ಚು.

ಅಲ್ಲದೆ ಅಧಿಕಾರಿಗಳು ಯಾವಾಗ ಯಾವ ಗ್ರಾಮಕ್ಕೆ ಭೇಟಿ ಕೊಟ್ಟಿದ್ದರೆಂಬುದೂ ಸಂಘದವರಿಗೆ ಒಗಟಾಗಿದೆಯಂತೆ.

ಅಲ್ಲಿನ ಸರ್ಕಾರ ಮತ್ತು ಅದರ ಅಧಿಕಾರಿಗಳು ಹಾಗೂ ಇಲ್ಲಿನ ಸರ್ಕಾರ ಮತ್ತು ಅಧಿಕಾರಿಗಳು—ಇವೆರಡರ ನಡುವಿನ ಮನೋಭಾವದ ಅಂತರ ಹೀಗಿದೆ.

ಇದೇ ೮೨-೮೩ರ ಅವಧಿಯಲ್ಲಿ ದ.ಕ.ಜಿಲ್ಲೆಯಲ್ಲೂ ತೋಟಗಳು ನಷ್ಟಕ್ಕೀಡಾದ ಬಗ್ಗೆ ಪುಣಚಾ ಗ್ರಾಮದ ಬೆಳೆಗಾರರು ಅ. ಭಾ. ಅಡಿಕೆ ಬೆಳೆಗಾರರ ಸಂಘ, ದ. ಕ. ಡಿಸಿಸಿ ಬ್ಯಾಂಕ್ ಮತ್ತು ಶಾಸಕರ ಮೂಲಕ ನಡೆಸಿದ ಪ್ರಯತ್ನಗಳ ಫಲವಾಗಿ ಅಲ್ಲಿನ ೮ ತಾ|| ಗಳಿಗೆ ಅನ್ವಯಿಸುವಂತೆ 'ನಬಾರ್ಡ್'ನಿಂದ ವ್ಯಾಪಕ ಪ್ರಯೋಜನವುಳ್ಳ ದೀರ್ಘಾವಧಿ ಅಭಿವೃದ್ಧಿ ಸಾಲಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. (ಅಕ್ಟೋಬರ್ ೧೦ರ 'ಮುಂಗಾರು' ದಿನಪತ್ರಿಕೆ ನೋಡಿ.)

### ಶಾರದಾ ಮಹೋತ್ಸವ

ಶೃಂಗೇರಿ: ಇಲ್ಲಿನ ಶಾರದಾ ಯುವಕ ಕಲಾ ಸಂಘ ಅ. ೬. ೭ರಂದು ಶಾರದಾ ಮಹೋತ್ಸವ ಆಚರಿಸಿತು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶೃಂಗೇರಿಯ ಮೈಸೂರು ಬ್ಯಾಂಕ್ ಮ್ಯಾನೇಜರ್ ಸೀತಾರಾಂ ವಹಿಸಿದ್ದು ನಾರ್ವೆ ಪ್ರೌಢಶಾಲೆ ಮುಖ್ಯೋಪಾಧ್ಯಾಯ ಯೋಗಪ್ಪ ಬಹುಮಾನ ಹಂಚಿದರು. ಬೇಲೂರು ಕೃಷ್ಣಮೂರ್ತಿ, ಪಿ. ತಿಮ್ಮಪ್ಪ. ಕಲಬಿ ಶ್ರೀನಿವಾಸ್ ಮುಖ್ಯ ಅತಿಥಿಗಳಾಗಿದ್ದರು.

ಮಹೋತ್ಸವದ ಅಂಗವಾಗಿ ಜಿಲ್ಲಾ ಮಟ್ಟದ ಭಕ್ತಿ ಗೀತೆ, ಭಾವ ಗೀತೆ, ಆಶು ಭಾಷಣ ಸ್ಪರ್ಧೆಗಳು ನಡೆದವು. ಹರಿಕಥೆ, ನಾಟಕ ಮತ್ತಿತರ ಮನರಂಜನೆ ಕಾರ್ಯಕ್ರಮಗಳು ನಡೆದವು.

### ಬರಿಗಾಲು ವೈದ್ಯರ ಸಂಘಟನೆ

ಚಿಕ್ಕಮಗಳೂರು: ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ ದುಡಿಯುತ್ತಿರುವ 'ಬರಿಗಾಲು ವೈದ್ಯ'ರುಗಳಿಗೆ ಸರ್ಕಾರ ಕೊಡುತ್ತಿರುವ ಗೌರವಧನ ತೀರಾ ಕಡಿಮೆಯಿದ್ದು ಅವರ ಸ್ಥಿತಿಗತಿ ಬಹಳ ಕಷ್ಟಕರವಾಗಿದೆ ಅವರ ಸಮಸ್ಯೆಗಳನ್ನು ಸರ್ಕಾರಕ್ಕೆ ವಿವರಿಸಿ ಬಗೆಹರಿಸಿಕೊಳ್ಳಲು ಸಂಘಟನೆ ಬೇಕಾಗಿದ್ದು ಎ.ಐ.ಟಿ.ಯು.ಸಿ. ಜಿಲ್ಲಾ ಘಟಕ ಇವರ ಸಂಘಟನೆ ಮಾಡಲು ನಿರ್ಧರಿಸಿರುವುದಾಗಿ ಪ್ರಕಟಣೆಯೊಂದು ತಿಳಿಸಿದೆ.

### ಅ. ಭಾ. ವಿ. ಪ. ಪ್ರಾಂತೀಯ ವಿದ್ಯಾರ್ಥಿ ಸಮ್ಮೇಳನ

ಕೊಪ್ಪ: ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್ತಿನ ಪ್ರಾಂತೀಯ ಸಮ್ಮೇಳನ ಬೆಂಗಳೂರಿನಲ್ಲಿ ಅ. ೧೯ ಮತ್ತು ೨೦ರಂದು ನಡೆಯುತ್ತದೆ. ಕೊಪ್ಪ ಶಾಖೆಯಿಂದ ೧೦ ಜನ ವಿದ್ಯಾರ್ಥಿಗಳು ಭಾಗವಹಿಸುತ್ತಾರೆ.

ಇದೇ ಸಂದರ್ಭದಲ್ಲಿ ಅವರು ವಿದ್ಯಾ ಮಂತ್ರಿ ರಘುಪತಿಯವರನ್ನು ಕಂಡು ಇಲ್ಲಿನ ಪ್ರ. ದ. ಕಾಲೇಜಿನ ಸಮಸ್ಯೆಗಳನ್ನು ಬಗೆಹರಿಸುವಂತೆ ಒತ್ತಾಯಿಸುವರು.

---

ಮಲೆನಾಡು ಯಕ್ಷಗಾನ ಕಲಾ ಶಿಕ್ಷಣ ಕೇಂದ್ರ, ಹರಿಹರಪುರ.

ತಾ|| ೬-೧೦-೮೪ ರಂದು ನಡೆದ ಅದೃಷ್ಟ ಬಹುಮಾನ ಯೋಜನೆ ಡ್ರಾ ಫಲಿತಾಂಶ

| | | | |
|---|---|---|---|
| ಮೊದಲ ಬಹುಮಾನ | | .... | 1698 |
| 2ನೇ | " | .... | 1542 |
| 3ನೇ | " | .... | 211 |
| 4ನೇ | " | .... | 601 |
| 5ನೇ | " | .... | 2297 |
| 6ನೇ | " | .... | 2505 |

(ವಿಜೇತರು ಬಹುಮಾನಗಳನ್ನು ನವೆಂಬರ್ 6 ರೊಳಗಾಗಿ ಕಾರ್ಯದರ್ಶಿಗಳಿಂದ ಪಡೆದುಕೊಳ್ಳಬೇಕು.)

---

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: **ಸೀಮನೆ ನಾಗರಾಜ್,** ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ. ಶೃಂಗೇರಿ ಪ್ರತಿನಿಧಿ: **ಕಲ್ಕುಳಿ ವಿಠಲ ಹೆಗ್ಡೆ**